# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರದಿಂದ ಚುನಾಯಿತರಾದವರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **1205** |
| ಉತ್ತರಿಸಬೇಕಾದ ದಿನಾಂಕ | : | 22.09.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಆಶ್ರಯ ಯೋಜನೆಯಡಿ ನಿವೇಶನಗಳನ್ನು ಹಂಚಿಕೆ ಮಾಡಲಾಗುತ್ತಿದೆಯೇ ; | ರಾಜ್ಯದ ಗ್ರಾಮೀಣ ಹಾಗೂ ನಗರ ಪ್ರದೇಶಗಳಲ್ಲಿ ವಾಸಿಸುತ್ತಿರುವ ಬಡತನ ರೇಖೆಗಿಂತ ಕೆಳಗಿನ ಅರ್ಹ ನಿವೇಶನರಹಿತ ಕುಟುಂಬಗಳಿಗೆ ನಿವೇಶನ ಸೌಕರ್ಯ ಕಲ್ಪಿಸಲು ಗ್ರಾಮೀಣ ಪ್ರದೇಶದಲ್ಲಿ ಮುಖ್ಯ ಮಂತ್ರಿಗಳ ಗ್ರಾಮೀಣ ನಿವೇಶನ ಹಾಗೂ ನಗರ ಪ್ರದೇಶದಲ್ಲಿ ಮುಖ್ಯಮಂತ್ರಿಗಳ ನಗರ ನಿವೇಶನ ಯೋಜನೆಗಳು ಜಾರಿಯಲ್ಲಿದ್ದು, ರಾಜ್ಯಾದ್ಯಂತ 2019 ರಿಂದ 2021 ರವರೆಗೆ ಆಶ್ರಯ ನಿವೇಶನಗಳಿಗೆ ಹಂಚಿಕೆ ಮಾಡಿರುವ ಹಕ್ಕುಪತ್ರಗಳ ವಿವರ ಈ ಕೆಳಕಂಡಂತಿದೆ. |
| (ಆ) | ಕಳೆದ ಎರಡು ವರ್ಷಗಳಿಂದ ಹಂಚಿಕೆಯಾಗಿರುವ ಆಶ್ರಯ ನಿವೇಶನಗಳ ಒಟ್ಟು ಸಂಖ್ಯೆ ಎಷ್ಟು ; | |

| ಯೋಜನೆ | 2019-20 | 2020-21 | 2021-22 | ಒಟ್ಟು |
|---|---|---|---|---|
| ಗ್ರಾಮೀಣ ನಿವೇಶನ | 2537 | 2217 | 1234 | 5988 |
| ನಗರ ನಿವೇಶನ | 1875 | 502 | 792 | 3169 |
| **ಒಟ್ಟು** | **4412** | **2719** | **2026** | **9157** |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಇ) | ಸದರಿ ಯೋಜನೆಯಲ್ಲಿ ಮನೆ ನಿರ್ಮಾಣಕ್ಕೆ ನೀಡಲಾಗುತ್ತಿರುವ ಮೊತ್ತವೆಷ್ಟು ; | ವಿವಿಧ ವಸತಿ ಯೋಜನೆಗಳಡಿ ಫಲಾನುಭವಿಗಳಿಗೆ ಬಿಡುಗಡೆ ಮಾಡುತ್ತಿರುವ ಯೋಜನಾವಾರು ಸಹಾಯಧನದ ವಿವರ ಕೆಳಕಂಡಂತಿದೆ. |
| (ಈ) | ಸದರಿ ಮೊತ್ತವನ್ನು ಎಂದಿನಿಂದ ನೀಡಲಾಗುತ್ತಿದೆ ; | |

( ರೂ.ಲಕ್ಷಗಳಲ್ಲಿ)

| ಕ್ರ. ಸಂ | ಯೋಜನೆ | ಗ್ರಾಮೀಣ | | ನಗರ | |
|---|---|---|---|---|---|
| | | ಸಾಮಾನ್ಯ / ಅಲ್ಪ ಸಂಖ್ಯಾತ | ಪ.ಜಾ/ ಪ. ಪಂಗಡ | ಸಾಮಾನ್ಯ / ಅಲ್ಪಸಂ ಖ್ಯಾತ | ಪ.ಜಾ/ ಪ. ಪಂಗಡ |
| 1 | ಬಸವ ವಸತಿ ಯೋಜನೆ(ಗ್ರಾ) | 1.20 | - | - | |
| 2 | ವಾಜಪೇಯಿ ನಗರ ವಸತಿ ಯೋಜನೆ (ನ) | - | - | 1.20 | |
| 3 | ಡಾ.ಬಿ.ಆರ್ ಅಂಬೇಡ್ಕರ್ ನಿವಾಸ್ ಯೋಜನೆ (ಗ್ರಾ & ನ) | - | 1.75 | - | 2.00 |
| 4 | ದೇವರಾಜ್ ಅರಸು ವಸತಿ ಯೋಜನೆ (ಗ್ರಾ & ನ) | 1.20 | 1.50 | 1.20 | 1.50 |
| 5 | ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾ)* | 1.20 | 1.50 | - | |

| | | | | | |
|---|---|---|---|---|---|
| 6 | ಪ್ರಧಾನ ಮಂತ್ರಿ ಆವಾಸ್ ಯೋಜನೆ(ನ)** | - | - | 1.50 | 1.50 |

ವಿವಿಧ ವಸತಿ ಯೋಜನೆಗಳಡಿ ಮನೆಗಳ ನಿರ್ಮಾಣಕ್ಕಾಗಿ ಫಲಾನುಭವಿಗಳಿಗೆ ಸಹಾಯಧನ ಕೆಳಕಂಡ ವರ್ಷಗಳಿಂದ ನೀಡಲಾಗುತ್ತಿದೆ.

(ರೂ.ಲಕ್ಷಗಳಲ್ಲಿ)

| ಯೋಜನೆ | ಸಹಾಯಧನ | ವರ್ಷ |
|---|---|---|
| ಬಸವ ವಸತಿ ಯೋಜನೆ(ಗ್ರಾ) | 1.20 | 2013-14 |
| ವಾಜಪೇಯಿ ನಗರ ವಸತಿ ಯೋಜನೆ (ನ) | 1.20 | 2013-14 |
| ಡಾ.ಬಿ.ಆರ್ ಅಂಬೇಡ್ಕರ್ ನಿವಾಸ್ ಯೋಜನೆ (ಗ್ರಾ & ನ) | 1.75 / 2.00 | 2017-18 |
| ದೇವರಾಜ್ ಅರಸು ವಸತಿ ಯೋಜನೆ (ಗ್ರಾ & ನ) | 1.20 / 1.50 | 2014-15 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾ)* | 1.20 / 1.50 | 2016-17 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ(ನ)** | 1.50 | 2016-17 |

* ಪ್ರಧಾನ ಮಂತ್ರಿ ಆವಾಸ್(ಗ್ರಾಮೀಣ) ಯೋಜನೆಯಡಿ 60:40 ಅನುಪಾತದಂತೆ ಕೇಂದ್ರ ಸರ್ಕಾರದಿಂದ ರೂ.72,000/-ಗಳನ್ನು ಒದಗಿಸಲಾಗುತ್ತಿದ್ದು ಇನ್ನುಳಿದ ರೂ.48,000/-ಗಳನ್ನು ರಾಜ್ಯ ಸರ್ಕಾರದಿಂದ ಒದಗಿಸಲಾಗುತ್ತಿದೆ.

** ಪ್ರಧಾನ ಮಂತ್ರಿ ಆವಾಸ್ (ನಗರ) ಯೋಜನೆಯಡಿ ನೀಡಲಾಗುವ ಸಂಪೂರ್ಣ ಸಹಾಯಧನ ರೂ.1.50 ಲಕ್ಷಗಳನ್ನು ಕೇಂದ್ರ ಸರ್ಕಾರದಿಂದ ನೀಡಲಾಗುತ್ತಿದೆ.

| | | |
|---|---|---|
| (ಉ) | ಸದರಿ ಮೊತ್ತದಲ್ಲಿ ಮನೆ ಕಟ್ಟಿಕೊಳ್ಳಲು ಕಷ್ಟ ಸಾಧ್ಯವೆಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ ; | ಫಲಾನುಭವಿಗಳು ಮನೆ ನಿರ್ಮಿಸಿ ಕೊಳ್ಳಲು ಸರ್ಕಾರದಿಂದ ಸಹಾಯಧನ ಮಾತ್ರ ನೀಡಲಾಗುತ್ತಿದ್ದು, ಘಟಕ ವೆಚ್ಚವನ್ನು ನೀಡುತ್ತಿಲ್ಲ. ಸರ್ಕಾರ ನೀಡುವ ಸಹಾಯಧನದೊಂದಿಗೆ ಫಲಾನುಭವಿಯು ತನ್ನ ಸ್ವಂತ ವಂತಿಕೆ ಹಣ ಉಪಯೋಗಿಸಿ ಕೊಂಡು ಮನೆ ನಿರ್ಮಿಸಿ ಕೊಳ್ಳಬೇಕಾಗಿರುತ್ತದೆ. |
| (ಊ) | ಹಾಗಿದ್ದಲ್ಲಿ ಯಾವ ಕಾಲಮಿತಿಯಲ್ಲಿ ಸದರಿ ಮೊತ್ತವನ್ನು ಪರಿಷ್ಕರಿಸಲಾಗುವುದು ? | ವಿವಿಧ ವಸತಿ ಯೋಜನೆಗಳಡಿ ಈಗಾಗಲೇ ನೀಡಲಾದ ಗುರಿಯ ಪೈಕಿ ಪ್ರಗತಿಯಲ್ಲಿರುವ ಮನೆಗಳನ್ನು ಪೂರ್ಣಗೊಳಿಸಲು ಅವ್ಯವಿರುವ ಅನುದಾನವನ್ನು ಆದ್ಯತೆ ಮೇರೆಗೆ ಮುಂದಿನ ಮೂರು ವರ್ಷಗಳ ಅವಧಿಯಲ್ಲಿ ಒದಗಿಸಲು ತೀರ್ಮಾನ ಕೈಗೊಂಡಿರುವುದರಿಂದ ಪ್ರಸ್ತುತ ಸದರಿ ಪ್ರಸ್ತಾವಣೆಯನ್ನು ಪರಿಗಣಿಸಲು ಸಾಧ್ಯವಾಗುವುದಿಲ್ಲ. |

ಸಂಖ್ಯೆ :ವಇ 348 ಹೆಚ್‌ಎಎಂ 2021

(ವಿ. ಸೋಮಣ್ಣ)
ವಸತಿ ಮತ್ತು ಮೂಲಸೌಲಭ್ಯ
ಅಭಿವೃದ್ಧಿ ಸಚಿವರು